# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| | | |
|---|---|---|
| ಸಂಪುಟ ೧೪೯<br>**Volume 149** | ಬೆಂಗಳೂರು, ಗುರುವಾರ, ಜೂನ್ ೧೯, ೨೦೧೪ (ಜ್ಯೇಷ್ಠ ೨೯, ಶಕ ವರ್ಷ ೧೯೩೬)<br>**Bangalore, Thursday, June 19, 2014 (Jyeishta 29, Shaka Varsha 1936)** | ಸಂಚಿಕೆ ೨೫<br>**Issue 25** |


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್. ಮಹದೇವ, ಕಾರ್ಮಿಕ ನಿರೀಕ್ಷಕರು, ಕಾರ್ಮಿಕ ಇಲಾಖೆ ಇವರನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ

**ಓದಲಾಗಿದೆ :**

1. ನೌಕರರ ಮನವಿ ದಿನಾಂಕ: 23-12-2013
2. ಸರ್ಕಾರದ ಪತ್ರ ಸಂಖ್ಯೆ: ಕಂಇ 01 ಮುನೋಸೇ (2) 2014, ದಿನಾಂಕ: 02-01-2014
3. ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರ ಅ.ಟಿ. ಸಂಖ್ಯೆ: ಕಾಇ 38 ಎಲ್‌ಇಟಿ 2014, ದಿನಾಂಕ: 04-02-2014
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ-2-199/2013-14, ದಿನಾಂಕ: 17-02-2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಶ್ರೀ ಆರ್. ಮಹದೇವ, ಕಾರ್ಮಿಕ ನಿರೀಕ್ಷಕರು, ಕಾರ್ಮಿಕ ಇಲಾಖೆ ಇವರನ್ನು ಕಂದಾಯ ಇಲಾಖೆ ವ್ಯಾಪ್ತಿಯಲ್ಲಿ ಬರುವ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಉಪ ನೋಂದಣಾಧಿಕಾರಿ ಹುದ್ದೆಗೆ ಖಾಯಂ ಆಗಿ ವಿಲೀನಗೊಳಿಸುವಂತೆ ಮನವಿ ಸಲ್ಲಿಸಿರುತ್ತಾರೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಸದರಿಯವರ ಸೇವೆಯನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ವಿಲೀನಗೊಳಿಸುವ ಕುರಿತು ಆಯುಕ್ತರು ಕಾರ್ಮಿಕ ಇಲಾಖೆ ಇವರನ್ನು ಕೋರಲಾಗಿತ್ತು. ಅದರಂತೆ ಆಯುಕ್ತರು ಕಾರ್ಮಿಕ ಇಲಾಖೆ ಅವರು ಸದರಿಯವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ 16(ಎ)(ii) ರಡಿಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ ಸರ್ಕಾರದ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ ಇವರಿಗೆ ಪತ್ರ ಬರೆದಿರುತ್ತಾರೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಕಾರ್ಮಿಕ ಇಲಾಖೆಯು ಸದರಿ ನೌಕರರನ್ನು ಕಂದಾಯ ಇಲಾಖೆ ವ್ಯಾಪ್ತಿಯಲ್ಲಿ ಬರುವ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ವಿಲೀನಗೊಳಿಸಲು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮ 1977ರ ನಿಯಮಾವಳಿಗಳ ನಿಯಮ 16(ಎ)(ii) ರಡಿಯಲ್ಲಿ ಅವರ ಸೇವೆಯನ್ನು ಕಂದಾಯ ಇಲಾಖೆಗೆ ಬಿಟ್ಟುಕೊಡಲು ಕಾರ್ಮಿಕ ಇಲಾಖೆಯು ಒಪ್ಪಿರುತ್ತದೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಶ್ರೀ ಆರ್. ಮಹದೇವ, ಕಾರ್ಮಿಕ ನಿರೀಕ್ಷಕರು, ಕಾರ್ಮಿಕ ಇಲಾಖೆ ಅವರ ಸೇವೆಯನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ವಿಲೀನಗೊಳಿಸಲು ಅವರಿಗೆ ಕೆಲವು ಷರತ್ತುಗಳನ್ನು ವಿಧಿಸಿ, ಅವರ ಸೇವೆಯನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಪನೋಂದಣಾಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸಬಹುದಾಗಿದೆ ಎಂಬ ಅಭಿಪ್ರಾಯವನ್ನು ನೀಡಿರುತ್ತಾರೆ.

ಶ್ರೀ ಆರ್. ಮಹದೇವ, ಕಾರ್ಮಿಕ ನಿರೀಕ್ಷಕರು, ಕಾರ್ಮಿಕ ಇಲಾಖೆ ಇವರ ಸೇವೆಯನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ ಕಾರ್ಮಿಕ ಇಲಾಖೆ ಮತ್ತು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಇವರುಗಳು ನೀಡಿರುವ ಅಭಿಪ್ರಾಯಗಳನ್ನು ಪರಿಶೀಲಿಸಿದ ಸರ್ಕಾರವು ಸದರಿ ನೌಕರರನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮಾವಳಿಗಳ ನಿಯಮ 16 (ಎ) ರನ್ವಯ ಸದರಿಯವರ ಸೇವೆಯನ್ನು ಕಾರ್ಮಿಕ ಇಲಾಖೆಯಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಪ ನೋಂದಣಾಧಿಕಾರಿ ಹುದ್ದೆಗೆ ವಿಲೀನಗೊಳಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಮುನೋಸೇ (2) 2014, ಬೆಂಗಳೂರು, ದಿನಾಂಕ: 04ನೇ ಮಾರ್ಚ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಆರ್. ಮಹದೇವ, ಕಾರ್ಮಿಕ ನಿರೀಕ್ಷಕರು, ಕಾರ್ಮಿಕ ಇಲಾಖೆ ಇವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮಾವಳಿಗಳ ನಿಯಮ 16 (ಎ) ರನ್ವಯ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಪ ನೋಂದಣಾಧಿಕಾರಿ ಹುದ್ದೆಯಲ್ಲಿ ಈ ಕೆಳಕಂಡ ನಿಬಂಧನೆಗಳನ್ನು ವಿಧಿಸಿ, ವಿಲೀನಗೊಳಿಸಿ ಆದೇಶಿಸಿದೆ.

1) ವಿಲೀನಗೊಳ್ಳುವ ಇಲಾಖೆಯ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡತಕ್ಕದ್ದು.

2) ಖಾಯಂ ವರ್ಗಾವಣೆಯಾದ ನೌಕರರು ಅವರ ಕೋರಿಕೆಗೆ ಅನುಗುಣವಾಗಿ ಆಗಿದ್ದಲ್ಲಿ, ವರ್ಗಾವಣೆಯಾದ ದಿನಾಂಕದಿಂದ ವರ್ಗಾವಣೆಯಾದ ಇಲಾಖೆಯಲ್ಲಿನ ವೃಂದದಲ್ಲಿರುವ ಜ್ಯೇಷ್ಠತಾ ಪಟ್ಟಿಯಲ್ಲಿ ಕಡೆಯ ವ್ಯಕ್ತಿಯ ಕೆಳಗೆ ತರಬೇಕಾಗುತ್ತದೆ. ಇಂತಹ ಪ್ರಕರಣಗಳಲ್ಲಿ ವರ್ಗಾವಣೆ ಭತ್ಯೆ ಲಭ್ಯವಾಗುವುದಿಲ್ಲ.

3) ಈ ರೀತಿಯ ವರ್ಗಾವಣೆಯು ಸರ್ಕಾರಿ ನೌಕರನ ಸೇವಾವಧಿಯನ್ನು ಒಮ್ಮೆ ಮಾತ್ರ ಅನುಮತಿಸಲ್ಪಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಲ್. ಬಾಗಲವಾಡೆ,**
ಪೀಠಾಧಿಕಾರಿ,
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

**P.R. 422**
**SC 25**

## ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವಾಲಯ

**ವಿಷಯ :** ಮಹಿಳೆಯರ ಮತ್ತು ಮಕ್ಕಳ ವಿರುದ್ಧ ನಡೆಯುವ ದೌರ್ಜನ್ಯಗಳನ್ನು ತಡೆಗಟ್ಟಲು ಜಿಲ್ಲಾಮಟ್ಟದ ಸಮಿತಿಯನ್ನು ರಚಿಸುವ ಕುರಿತು

**ಪ್ರಸ್ತಾವನೆ :**

ರಾಜ್ಯದಲ್ಲಿ ಬಾಲ್ಯವಿವಾಹ, ಶಿಶುಮಾರಾಟ, ಲೈಂಗಿಕ ದೌರ್ಜನ್ಯ, ದೇವದಾಸಿ ಪದ್ಧತಿಯ ಅನುಸರಣೆ ಹಾಗೂ ಬೆತ್ತಲೆ ಸೇವೆ ಮುಂತಾದ ಪ್ರಕರಣಗಳು ಇನ್ನೂ ನಡೆಯುತ್ತಿದ್ದು, ಮಾಧ್ಯಮಗಳಲ್ಲಿ ವ್ಯಾಪಕವಾಗಿ ಪ್ರಕಟವಾಗುತ್ತಿದೆ. ಇವುಗಳನ್ನು ತಡೆಗಟ್ಟಲು ಅನೇಕ ಕಾನೂನುಗಳನ್ನು ರೂಪಿಸಿದ್ದರೂ ಅವುಗಳನ್ನು ಅನುಷ್ಠಾನಗೊಳಿಸಲು ಅಧಿಕಾರಿಗಳು ಬದ್ಧತೆಯನ್ನು ತೋರುತ್ತಿಲ್ಲ. ಮೇಲ್ಕಂಡ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಬಗೆಹರಿಸಲು ಸರ್ಕಾರವು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಹಲವಾರು ಸಮಿತಿಗಳನ್ನು ರಚಿಸಿರುತ್ತವೆ. ಈ ಸಮಿತಿಗಳು ಕಾಲಕಾಲಕ್ಕೆ ಸಭೆ ಸೇರಿ ಮೇಲ್ಕಂಡ ವಿಷಯಗಳನ್ನು ಪರಿಣಾಮಕಾರಿಯಾಗಿ ವಿಲೇವಾರಿ ಮಾಡುತ್ತಿಲ್ಲವಾದ್ದರಿಂದ ಮಹಿಳೆಯರ ಮತ್ತು ಮಕ್ಕಳ ವಿರುದ್ಧ ದೌರ್ಜನ್ಯದ ವಿಷಯಗಳು ಪತ್ರಿಕೆಗಳಲ್ಲಿ ವ್ಯಾಪಕವಾಗಿ ಪ್ರಕಟಗೊಳ್ಳುತ್ತಿವೆ.

ಆದುದರಿಂದ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸುವುದು ಸೂಕ್ತವೆಂದು ನಿರ್ಧರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಮಮಇ 72 ಮಮಅ 2014, ಬೆಂಗಳೂರು, ದಿನಾಂಕ: 03ನೇ ಮೇ, 2014**

ರಾಜ್ಯದಲ್ಲಿ ಮಹಿಳೆಯರ ಮತ್ತು ಮಕ್ಕಳ ವಿಷಯಗಳಲ್ಲಿ ಬರಬಹುದಾದ ಅಂದರೆ ಬಾಲ್ಯವಿವಾಹ, ಶಿಶುಮಾರಾಟ, ಅತ್ಯಾಚಾರ, ವರದಕ್ಷಿಣೆ ಕಿರುಕುಳ, ಕೌಟುಂಬಿಕ ಹಿಂಸೆ, ಲೈಂಗಿಕ ಕಿರುಕುಳ, ದೇವದಾಸಿ ಪದ್ಧತಿಯ ಅನುಸರಣೆ, ಬೆತ್ತಲೆ ಸೇವೆ ಮುಂತಾದ ವಿಷಯಗಳಲ್ಲಿ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಶೀಲಿಸಿ, ಪರಿಣಾಮಕಾರಿಯಾಗಿ ಇತ್ಯರ್ಥ ಪಡಿಸಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾಮಟ್ಟದ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿದೆ.

| | | |
|---|---|---|
| 1. | ಜಿಲ್ಲಾಧಿಕಾರಿ | ಅಧ್ಯಕ್ಷರು |
| 2. | ಜಿಲ್ಲಾ ಪೊಲೀಸ್ ಅಧೀಕ್ಷಕರು | ಸದಸ್ಯರು |
| 3. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | ಸದಸ್ಯರು |
| 4. | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ | ಸದಸ್ಯರು |
| 5. | ಜಿಲ್ಲಾ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 6. | ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ | ಸದಸ್ಯರು |
| 7. | ಜಿಲ್ಲಾಧಿಕಾರಿಗಳಿಂದ ನೇಮಿಸಲ್ಪಡುವ ಜಿಲ್ಲೆಯ 2 ಸಂಸ್ಥೆಗಳ ತಲಾ ಒಬ್ಬರು ಪ್ರತಿನಿಧಿ | ಸದಸ್ಯರು |
| 8. | ಜಿಲ್ಲಾ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯ–ಕಾರ್ಯದರ್ಶಿ |

ಮೇಲ್ಕಂಡ ಸಮಿತಿಯು ಕಂದಾಯ ಇಲಾಖೆ ನಡೆಸುವ ಪಿಂಚಣಿ ಅದಾಲತ್ ಮಾದರಿಯಲ್ಲಿ ಪ್ರತಿ ತಿಂಗಳು ಮೊದಲನೇ ವಾರದಲ್ಲಿ ತಪ್ಪದೇ ಸಭೆ ಸೇರುವುದು. ಸಭೆಯಲ್ಲಿ ವಿಲೇವಾರಿ ಮಾಡಿದ ಪ್ರಕರಣಗಳು ಮತ್ತು ಕೈಗೊಂಡ ಕ್ರಮಗಳ ಬಗ್ಗೆ ಮಾಹಿತಿಯನ್ನು ಪ್ರತಿ ತ್ರೈಮಾಸಿಕ ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಕೃಷ್ಣಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ–1 (ಪ್ರಭಾರ)

ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ

**P.R. 423**
**SC 200**

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಎಂ. ಅರುಣ್ ಕುಮಾರ್, ಸಹಕಾರ ಅಭಿವೃದ್ಧಿ ಅಧಿಕಾರಿ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಇಲಾಖಾ ವಿಚಾರಣೆ – ಅಂತಿಮ ಆದೇಶ

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಬ್ಬಂದಿ/41/ಇಸಿಸಿ/2011–12, ದಿನಾಂಕ: 02–07–2012

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸಹಕಾರ ಸಂಘಗಳ ನಿಬಂಧಕರ ದಿನಾಂಕ: 02–07–2012ರ ಪತ್ರದಲ್ಲಿ ಶ್ರೀ ಎಂ. ಅರುಣ್ ಕುಮಾರ್, ಸಹಕಾರ ಅಭಿವೃದ್ಧಿ ಅಧಿಕಾರಿ, ಚಿಂತಾಮಣಿ ತಾಲ್ಲೂಕು ಇವರು ದಿನಾಂಕ: 11–04–2011 ರಿಂದ ದಿನಾಂಕ: 11–06–0211 ರವರೆಗೆ ಇವರ ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಪಡೆದು, ರಜೆ ನಂತರದ ದಿನಾಂಕ: 12–06–2011ರ ಭಾನುವಾರದ ನಂತರ ದಿನಾಂಕ: 13–06–2011ರಂದು ಕಛೇರಿಗೆ ಹಾಜರಾಗಬೇಕಿತ್ತು. ಆದರೆ ನೌಕರರು ದಿನಾಂಕ: 13–06–2011 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದರಿಂದ, ಹುದ್ದೆಯ ಪ್ರಭಾರವನ್ನು ವಹಿಸಿ ಕೊಡುವಂತೆ ಸೂಚಿಸಿದ್ದರೂ ಪ್ರಭಾರವನ್ನು ನೀಡದೆ ಇರುವುದರಿಂದ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರನ್ವಯ ಶಿಸ್ತು ಕ್ರಮವಿಟ್ಟು ನಿಯಮ–11 ರಡಿ ದೋಷಾರೋಪಣಾ ಪಟ್ಟಿಯೊಂದಿಗೆ ದಿನಾಂಕ: 10–02–2012ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಇವರ ಮೂಲಕ ಜಾರಿಗೊಳಿಸಲು ಕ್ರಮವಿಡಲಾಗಿರುವುದಾಗಿ ತಿಳಿಸಿದ್ದಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿಕ್ಕಬಳ್ಳಾಪುರ ಇಲ್ಲಿನ ಜಾರಿಗಾರರಾದ ಶ್ರೀ ನಾಗರಾಜ್, ಎಸ್. ರವರ ದಿನಾಂಕ: 29–03–2012ರ ಪತ್ರದಲ್ಲಿ ಆಪಾದಿತ ನೌಕರರು ಈ ಹಿಂದೆ ವಾಸವಿದ್ದ ಮನೆ ವಿಳಾಸದಲ್ಲಿ ವಾಸವಿರದೆ ಮನೆ ಬೀಗ ಹಾಕಿದ್ದರಿಂದ ದಿನಾಂಕ: 10–02–2012ರ ನೋಟೀಸನ್ನು ಸಾಕ್ಷಿಗಳ ಸಮಕ್ಷಮ ಮಹಜರ್ ನಡವಳಿಗಳ ಮೂಲಕ ಜಾರಿಗೊಳಿಸಲಾಗಿದೆ ಎಂದು ತಿಳಿಸಿರುತ್ತಾರೆ. ಅಲ್ಲದೆ ಈ ಬಗ್ಗೆ ಪ್ರಚಲಿತ ಕನ್ನಡ ದಿನಪತ್ರಿಕೆಗಳಾದ ಪ್ರಜಾವಾಣಿ ಮತ್ತು ಕನ್ನಡಪ್ರಭ ದಿನಪತ್ರಿಕೆಗಳ ದಿನಾಂಕ: 21–05–2012ರ ಸಂಚಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಿ, ಪ್ರಕಟಣಾ ದಿನಾಂಕದಿಂದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗಲು ಮತ್ತು ಶಿಸ್ತು ನಡವಳಿಗೆ ಸಂಬಂಧಿಸಿದಂತೆ ಸಮಜಾಯಿಷಿಯನ್ನು ಸಲ್ಲಿಸುವಂತೆ ಪ್ರಕಟಣೆ ಹೊರಡಿಸಿದ್ದರೂ ಆಪಾದಿತ ನೌಕರರು ಇದುವರೆಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ಯಾವುದೇ ಸಮಜಾಯಿಷಿಯನ್ನು ನೀಡಿರುವುದಿಲ್ಲ. ಆಪಾದಿತ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–11 ರಡಿಯಲ್ಲಿ ಸೂಚಿತ ವಿಧಾನವನ್ನು ಅನುಸರಿಸುವುದು ಸಾಧ್ಯವಿಲ್ಲವಾದ್ದರಿಂದ, ಆಪಾದಿತ ಅಧಿಕಾರಿಯವರು ಸಮೂಹ 'ಬಿ' ಶ್ರೇಣಿಯ ಅಧಿಕಾರಿಯಾಗಿದ್ದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–14 ರಲ್ಲಿರುವ ಅವಕಾಶದಂತೆ ವಿಶೇಷ ಕಾರ್ಯವಿಧಾನವನ್ನು ಅನುಸರಿಸಿ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸಂದರ್ಭ, ಸನ್ನಿವೇಶ ಮತ್ತು ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿದಾಗ, ಆಪಾದಿತ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮಗಳಲ್ಲಿ ಗೊತ್ತುಪಡಿಸಿದ ವಿಧಾನಗಳನ್ನು ಅನುಸರಿಸುವುದು ಕಾರ್ಯ ಸಾಧ್ಯವಿಲ್ಲವೆಂದು ಮನಗಂಡು ಅಥವಾ ಅವನ ಜೊತೆ ಸಂಪರ್ಕ ನಡೆಸಲು ಸಾಧ್ಯವಿಲ್ಲವೆಂದು ಸ್ಪಷ್ಟಪಡಿಸಿಕೊಂಡು ದಿನಾಂಕ: 10–02–2012ರ ನೋಟೀಸ್‌ನಲ್ಲಿ ಆಪಾದಿತರ ವಿರುದ್ಧ ಮಾಡಲಾದ ಆರೋಪಗಳಾದ ದಿನಾಂಕ: 13–06–2011ರಿಂದ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಾಗಿರುವುದು, ಹುದ್ದೆಯ ಪ್ರಭಾರವನ್ನು ವಹಿಸಿಕೊಡದೆ ಮೇಲಾಧಿಕಾರಿಗಳ ಆದೇಶ ಉಲ್ಲಂಘಿಸಿ ದುರ್ನಡತೆ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–14ರಲ್ಲಿರುವ ಅವಕಾಶದಂತೆ ವಿಶೇಷ ಕಾರ್ಯವಿಧಾನವೆಂದು ಪರಿಗಣಿಸಿ ಆಪಾದಿತರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–8 (vii) ರನ್ವಯ "ಸೇವೆಯಿಂದ ತೆಗೆದು" ಹಾಕುವ ದಂಡನೆ ವಿಧಿಸಲು ಸರ್ಕಾರವು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 263 ಎಸಸೇ 2012, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ–11(ಎ) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಅರುಣ್ ಕುಮಾರ್, ಸಹಕಾರ ಅಭಿವೃದ್ಧಿ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಇದೇ ನಿಯಮಾವಳಿಯ ನಿಯಮ–8(vii)ರಡಿ ನಿರ್ದಿಷ್ಟ ಪಡಿಸಲಾದಂತೆ ಇವರನ್ನು ಸರ್ಕಾರಿ ಸೇವೆಯಿಂದ ಈ ಕೂಡಲೇ ಜಾರಿಗೆ ಬರುವಂತೆ ತೆಗೆದು ಹಾಕುವ ದಂಡನೆ ವಿಧಿಸಿ ಆದೇಶಿಸಿದೆ.

ಶ್ರೀ ಎಂ. ಅರುಣ್ ಕುಮಾರ್, ಸಹಕಾರ ಅಭಿವೃದ್ಧಿ ಅಧಿಕಾರಿ ಹುದ್ದೆಯ ಕಾರ್ಯಭಾರದಿಂದ ಈ ಕೂಡಲೇ ಜಾರಿಗೆ ಬರುವಂತೆ ಬಿಡುಗಡೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**P.R. 424**
**SC 50**

## ಕಾರ್ಮಿಕ ಸಚಿವಾಲಯ

**ವಿಷಯ :** "ಅಗರಬತ್ತಿ" ಉದ್ದಿಮೆಯಲ್ಲಿನ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಉಪ ಸಮಿತಿ ರಚಿಸುವ ಕುರಿತು

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 09 ಎಲ್ಎಂಡಬ್ಲ್ಯೂ 2003, ದಿನಾಂಕ: 02–03–2009

2. ಕಾರ್ಮಿಕ ಆಯುಕ್ತರ ಪತ್ರ ಸಂಖ್ಯೆ: ಕರ್ವೇಕಾ–2/ಪರಿಷ್ಕರಣೆ/ಸಿಆರ್–10/2013–14, ದಿನಾಂಕ: 05–03–2014

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ರಾಜ್ಯಾದ್ಯಂತ "ಅಗರಬತ್ತಿ" ಉದ್ದಿಮೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲಾಗಿತ್ತು. ಈಗ ಕನಿಷ್ಠ ವೇತನ ಕಾಯ್ದೆ 1948ರ ಪರಿಚ್ಛೇದ 3(1)(ಬಿ) ರನ್ವಯ ಸದರಿ ಕನಿಷ್ಠ ವೇತನವನ್ನು ಪರಿಷ್ಕರಣೆ ಮಾಡಬೇಕಾಗಿರುತ್ತದೆ.

"ಅಗರಬತ್ತಿ" ಉದ್ದಿಮೆಯು ಪಾರಂಪರಿಕ ಉದ್ದಿಮೆಯಾಗಿರುತ್ತದೆ. ಇಲ್ಲಿನ ಬಹುತೇಕ ಕೆಲಸಗಳು ತುಂಡು ಆಧಾರದ ಮೇಲೆ ನಡೆಯುತ್ತಿರುತ್ತವೆ. ತುಂಡು ಆಧಾರದ ಮೇಲೆ ವೇತನ ನಿಗದಿಪಡಿಸಬೇಕಾದಲ್ಲಿ ಆಳವಾದ ಅಧ್ಯಯನದ ಅವಶ್ಯಕತೆಯಿರುತ್ತದೆ. "ಅಗರಬತ್ತಿ" ತಯಾರಿಕೆಯಲ್ಲಿ ತೊಡಗಿರುವ ಮಾಲೀಕರು ಮತ್ತು ಕಾರ್ಮಿಕರನ್ನು ಪ್ರತಿನಿಧಿಸುವ ಕಾರ್ಮಿಕ ಸಂಘಗಳ ಪ್ರತಿನಿಧಿಗಳನ್ನು ಮತ್ತು ಸ್ವತಂತ್ರ ಸದಸ್ಯರನ್ನೊಳಗೊಂಡ ಉಪ ಸಮಿತಿಯನ್ನು ರಚಿಸಿದಲ್ಲಿ ಆಳವಾದ ಅಧ್ಯಯನ ನಡೆಸಿ ವೈಜ್ಞಾನಿಕವಾಗಿ ವೇತನ ದರಗಳನ್ನು ನಿಗದಿಪಡಿಸಲು ಅನುಕೂಲವಾಗುತ್ತದೆ. ಆದ್ದರಿಂದ, ಈ ಉದ್ದಿಮೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ಕನಿಷ್ಠ ವೇತನ ಪರಿಷ್ಕರಣೆಯ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಕನಿಷ್ಠ ವೇತನ ಕಾಯ್ದೆ 1948ರ ಸೆಕ್ಷನ್ 5(1)(ಎ)ರಡಿ ಸದರಿ ಪ್ರತಿನಿಧಿಗಳನ್ನೊಳಗೊಂಡ ಉಪ ಸಮಿತಿಯನ್ನು ರಚಿಸುವಂತೆ ಕೋರಿ, ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 08 ಎಲ್ಎಂಡಬ್ಲ್ಯೂ 2014, ಬೆಂಗಳೂರು, ದಿನಾಂಕ: 17ನೇ ಮೇ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯದ್ಯಂತ "ಅಗರಬತ್ತಿ" ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಕನಿಷ್ಠ ವೇತನ ಕಾಯ್ದೆ 1948ರ ಸೆಕ್ಷನ್ 5(1)(ಎ)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಉಪ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| **ಸ್ವತಂತ್ರ ಸದಸ್ಯರು :–** | | |
| 1. | ಅಪರ ಕಾರ್ಮಿಕ ಆಯುಕ್ತರು (ಆಡಳಿತ) ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು | ಅಧ್ಯಕ್ಷರು |
| 2. | ಜಂಟಿ ಕಾರ್ಮಿಕ ಆಯುಕ್ತರು, ಕನಿಷ್ಠ ವೇತನ ಶಾಖೆ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು | ಸದಸ್ಯರು |
| 3. | ನಿರ್ದೇಶಕರು ಅಥವಾ ಅವರ ಪ್ರತಿನಿಧಿ, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು–01 | ಸದಸ್ಯರು |
| 4. | ಕುಲಸಚಿವರು ಅಥವಾ ಅವರ ಪ್ರತಿನಿಧಿ, ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿ, ನಾಗರಭಾವಿ, ಬೆಂಗಳೂರು–72 | ಸದಸ್ಯರು |
| **ಮಾಲೀಕರ ಪ್ರತಿನಿಧಿಗಳು :–** | | |
| 1. | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಸಾರಥಿ ಇಂಟರ್‌ನ್ಯಾಷನಲ್ ಐ.ಎನ್.ಸಿ. ನಂ. 13, 3ನೇ 'ಡಿ' ಮೇನ್, ಸಾರಕ್ಕಿ ಗ್ರಾಮ, ಜೆ.ಪಿ. ನಗರ, 1ನೇ ಹಂತ, ಬೆಂಗಳೂರು | ಸದಸ್ಯರು |
| 2. | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಪಾಟೀಲ್ ಪರಿಮಳ ವರ್ಕ್ಸ್, ನಂ. 158/11, ಗುಲ್ಕಮಾಳೆ, ಕಗ್ಗಲಿಪುರ, ಕನಕಪುರ ರಸ್ತೆ, ಬೆಂಗಳೂರು–82 | ಸದಸ್ಯರು |
| 3. | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಎನ್. ರಂಗರಾವ್ & ಸನ್ಸ್, ನಂ. 5, 1ನೇ ಹಂತ, ಇಂಡಸ್ಟ್ರೀಯಲ್ ಸಬಅರ್ಬ್, ಮೈಸೂರು–8 | ಸದಸ್ಯರು |
| 4. | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಜಯಂತಿ ಡೋಮೆಸ್ಟಿಕ್ ಪ್ರಾಡಕ್ಟ್ಸ್ ಪ್ರೈ ಲಿ., ನಂ. ಎ–37, ಕೆಎಸ್ಎಸ್ಐಡಿಸಿ ಇಂಡಸ್ಟ್ರೀಯಲ್ ಎಸ್ಟೇಟ್, ಕೆಜಿಎಫ್ | ಸದಸ್ಯರು |
| 5. | ವ್ಯವಸ್ಥಾಪಕ ನಿರ್ದೇಶಕರು, ಮೋಕ್ಷಾ ಅಗರಬತ್ತಿ ಕಂಪನಿ, ನಂ. 17, ಯಲಚನಹಳ್ಳಿ, ಜೆ.ಸಿ. ಇಂಡಸ್ಟ್ರೀಯಲ್ ಏರಿಯಾ, ಬೆಂಗಳೂರು–62 | ಸದಸ್ಯರು |
| 6. | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಪದ್ಮಿನಿ ಪ್ರಾಡಕ್ಟ್ಸ್, ಯೂನಿಟ್–1, ನಂ. 2, ಕ್ಯಾಸೂರಿನ್ ಸ್ಟ್ರೀಟ್, ಬೆಂಗಳೂರು–1 | ಸದಸ್ಯರು |
| **ಕಾರ್ಮಿಕ ಪ್ರತಿನಿಧಿಗಳು :–** | | |
| 1. | ಅಧ್ಯಕ್ಷರು/ಕಾರ್ಯದರ್ಶಿ, ಭಾರತೀಯ ಮಜ್ದೂರ್ ಸಂಘ (BMS), ಫೆಲಿಕ್ಸ್ ಪೈ ಬಝಾರ್, ಮಂಗಳೂರು–575001 | ಸದಸ್ಯರು |
| 2. | ಅಧ್ಯಕ್ಷರು/ಕಾರ್ಯದರ್ಶಿ, ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ (AITUC), ನಂ. 6, ಸಿರೂರು ಪಾರ್ಕ್ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು–20 | ಸದಸ್ಯರು |
| 3. | ಅಧ್ಯಕ್ಷರು/ಕಾರ್ಯದರ್ಶಿ, ಹಿಂದ ಮಜ್ದೂರ್ ಸಭಾ (HMS), ಕರ್ನಾಟಕ ರಾಜ್ಯ, ನಂ. 304, ಗೌರವ ಆರ್ಕೇಡ್–1, ಆತ್ಮಾನಂದ ಕಾಲೋನಿ, ಆರ್‌ಟಿ ನಗರ, ಬೆಂಗಳೂರು | ಸದಸ್ಯರು |

| | | |
|---|---|---|
| 4. | ಅಧ್ಯಕ್ಷರು/ಕಾರ್ಯದರ್ಶಿ, ಸಿ.ಐ.ಟಿ.ಯು. ನಂ. 40/5, 2ನೇ ಬಿ, ಮುಖ್ಯರಸ್ತೆ, 16ನೇ ಅಡ್ಡರಸ್ತೆ, ಸಂಪಂಗಿರಾಮನಗರ, ಬೆಂಗಳೂರು–560027 | ಸದಸ್ಯರು |
| 5. | ಅಧ್ಯಕ್ಷರು/ಕಾರ್ಯದರ್ಶಿ, ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್ (INTUC), ನಂ. 26/1, 2ನೇ ಮುಖ್ಯರಸ್ತೆ, 11ನೇ ಅಡ್ಡರಸ್ತೆ, ವೈಯಾಲಿಕಾವಲ್, ಬೆಂಗಳೂರು–03 | ಸದಸ್ಯರು |
| 6. | ಅಧ್ಯಕ್ಷರು/ಕಾರ್ಯದರ್ಶಿ, ಟ್ರೇಡ್ ಯೂನಿಯನ್ ಕೋ–ಆರ್ಡಿನೇಷನ್ ಸೆಂಟರ್ (TUCC), ನಂ. 43, ಎಮ್‌ಐಜಿ 2ನೇ ಸ್ಟೇಜ್, 2ನೇ ಮಹಡಿ, ಕೆಹೆಚ್‌ಬಿ ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು–79 | ಸದಸ್ಯರು |
| 7. | ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿ, ಬೆಂಗಳೂರು–29 | ಸದಸ್ಯ ಕಾರ್ಯದರ್ಶಿ |

ಸದರಿ ಉಪಸಮಿತಿಯು ಆರು ತಿಂಗಳ ಒಳಗಾಗಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ

**P.R. 425**
**SC 100**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕೆ.ಟಿ. ವಿಜಯ ಕೃಷ್ಣಕುಮಾರ್, ಜಂಟಿ ನಿರ್ದೇಶಕರು ಹಾಗೂ ಶ್ರೀ ಕೆ. ವನ್ನೂರಪ್ಪ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ–ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ :**
1. ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಇ 26 ಆಖಇ 1990 (ಭಾ), ದಿನಾಂಕ: 23–12–2010
2. ಸರ್ಕಾರಿ ಆದೇಶ ಸಂಖ್ಯೆ: ಆಇ 26 ಆಖಇ 1990 (ಭಾ), ದಿನಾಂಕ: 23–04–2011
3. ಕೆ.ಎ.ಟಿ. ಆದೇಶ ದಿನಾಂಕ: 03–09–2012 (ಅರ್ಜಿ ಸಂಖ್ಯೆ: 3557/2011)
4. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 07 DWA 2013, ದಿನಾಂಕ: 03–01–2014, ಕಾನೂನು ಕೋಶದ ಮುಖ್ಯಸ್ಥರು, ಆರ್ಥಿಕ ಇಲಾಖೆ ಅವರಿಂದ

**ಪ್ರಸ್ತಾವನೆ:**

ಜಿಲ್ಲಾ ಖಜಾನೆ, ಶಿವಮೊಗ್ಗ ಇಲ್ಲಿ ಜಿಲ್ಲಾ ಖಜಾನಾಧಿಕಾರಿ ಹಾಗೂ ಪ್ರಥಮ ದರ್ಜೆ ಸಹಾಯಕರಾಗಿ 1988 ರಿಂದ 1990 ರವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದಾಗ ವಿಶೇಷ ಭೂಸ್ವಾಧೀನ ಅಧಿಕಾರಿ (ಚಕ್ರ ಸಾವೇಹಕ್ಲು ಮತ್ತು ವಾರಾಹಿ) ಶಿವಮೊಗ್ಗ ಇವರ ಕಛೇರಿ ಪ್ರಾರಂಭವಾದ ದಿನಾಂಕ: 13–09–1989ಕ್ಕಿಂತ ಮುಂಚಿತವಾಗಿಯೇ ಹಿಂದಿನ ದಿನಾಂಕಗಳನ್ನು ನಮೂದಿಸಲ್ಪಟ್ಟ ಲಗತ್ತುಗಳನ್ನು ಒಳಗೊಂಡ ಬಿಲ್ಲುಗಳನ್ನು ಸರಿಯಾಗಿ ಪರಿಶೀಲಿಸದೇ ಅವುಗಳ ಮೊತ್ತ ರೂ. 20,44,017.65ಗಳನ್ನು ಪಾಸು ಮಾಡಿದ ಹಾಗೂ ಪಾಸು ಮಾಡಲು ಶಿಫಾರಸ್ಸು ಮಾಡುವ ಮೂಲಕ ನಿಯಮಗಳನ್ನು ಉಲ್ಲಂಘಿಸಿ ತೀವ್ರ ದುರ್ನಡತೆ ಎಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿದ ಆರೋಪಕ್ಕಾಗಿ ಶ್ರೀ ಕೆ.ಟಿ. ವಿಜಯಕೃಷ್ಣಕುಮಾರ್, ಜಂಟಿ ನಿರ್ದೇಶಕರು, ಹಾಗೂ ಶ್ರೀ ಕೆ. ವನ್ನೂರಪ್ಪ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಅವರುಗಳಿಗೆ ಸಿಸಿಎ ನಿಯಮಗಳ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ: 23–12–2010ರ ಕಾರಣ ಕೇಳುವ ನೋಟೀಸ್ ನೀಡಿ ವಿಚಾರಣೆ ಹೂಡಲಾಯಿತು. ಈ ನೋಟೀಸ್‌ಗೆ ಆರೋಪಿಗಳು ನೀಡಿದ ಉತ್ತರವನ್ನು ಪರಿಶೀಲಿಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 23–04–2011ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಿಸಲಾಯಿತು. ತಮ್ಮ ವಿರುದ್ಧ ವಿಚಾರಣೆ ಹೂಡಿದ ಕ್ರಮವನ್ನು ಪ್ರಶ್ನಿಸಿ ಶ್ರೀ ಕೆ.ಟಿ. ವಿಜಯಕೃಷ್ಣ ಕುಮಾರ್‌ರವರು ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ: 3557/2011 ಅನ್ನು ಸಲ್ಲಿಸಲಾಗಿ ಮಂಡಳಿಯ ದಿನಾಂಕ: 23–12–2010ರ ಆದೇಶದಲ್ಲಿ ಮಧ್ಯಪ್ರದೇಶ ಸರ್ಕಾರ ವರ್ಸಸ್ ಬಾನಿಸಿಂಗ್ ಹಾಗೂ ಇತರರು ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪನ್ನು ಆಧಾರವಾಗಿಟ್ಟುಕೊಂಡು ಘಟನೆ ಬೆಳಕಿಗೆ ಬಂದ 20 ವರ್ಷಗಳ ನಂತರ ಹೂಡಿದ ಇಲಾಖಾ ವಿಚಾರಣೆಯನ್ನು ಅಸಿಂಧುಗೊಳಿಸಿತು ಹಾಗೂ ಅಧಿಕಾರಿಗೆ ನೀಡಲ್ಪಟ್ಟ ದಿನಾಂಕ: 23–12–2010ರ ನೋಟೀಸನ್ನು ರದ್ದುಪಡಿಸಿತು.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದ ವಿರುದ್ಧ ರಿಟ್ ಅರ್ಜಿ ಸಲ್ಲಿಸಲು ಇದು ಅರ್ಹ ಪ್ರಕರಣ ಅಲ್ಲವೆಂದು ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ತೀರ್ಮಾನಿಸಲಾಗಿದ್ದು, ಇದರಿಂದಾಗಿ ಮಂಡಳಿಯ ದಿನಾಂಕ: 03–09–2012ರ ಆದೇಶವು ಅಂತಿಮವಾಗಿರುತ್ತದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

### ಸರ್ಕಾರಿ ಆದೇಶ ಸಂಖ್ಯೆ: ಆಇ 141 ಆಖಇ 2011, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್, 2014

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 3557/2011ರಲ್ಲಿ ನೀಡಿದ ದಿನಾಂಕ: 03–09–2012ರ ಆದೇಶವನ್ನು ಅನುಷ್ಠಾನಗೊಳಿಸಿ ಸರ್ಕಾರವು ಶ್ರೀ ಕೆ.ಟಿ. ವಿಜಯಕೃಷ್ಣಕುಮಾರ್, ಜಂಟಿ ನಿರ್ದೇಶಕರು ಹಾಗೂ ಶ್ರೀ ಕೆ. ವನ್ನೂರಪ್ಪ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಅವರುಗಳಿಗೆ ನೀಡಿದ ದಿನಾಂಕ: 23–12–2010ರ ನೋಟಿಸನ್ನು ಹಿಂಪಡೆಯುತ್ತದೆ. ಈ ವಿಚಾರಣೆ ಹೂಡದಿದ್ದಲ್ಲಿ ಅವರಿಬ್ಬರೂ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**P.R. 426**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಸಿಆಸುಇ 87 ಇಆಇ 2013, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2013**

ದಿನಾಂಕ: 26.10.2012ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 87 ಇಆಇ 2013ರಲ್ಲಿ ನಮೂದಾದ "ದಿನಾಂಕ: 26ನೇ ಅಕ್ಟೋಬರ್ 2012" ಎಂಬ ದಿನಾಂಕವನ್ನು "ದಿನಾಂಕ: 26ನೇ ಅಕ್ಟೋಬರ್ 2013" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವೈ. ಸುಶೀಲ,**
ಪೀಠಾಧಿಕಾರಿ–1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಇ–ಆಡಳಿತ)

**PR. 434**
**SC. 200**

## PERSONNEL AND ADMINISTRATIVE REFORMS SECRETARIAT

**Sub :** Appointment of IC-71224 MAJ SAURABH YADAV, ENGRS as ADC to Governor of Karnataka and terms and conditions of deputation.

**Read :** (1) Letter No. GS 88 EST 2013, dated:01-02-2014.

(2) Letter No. A/13013/ADC/Policy/MS 3C, dated: 07- 01-2014 of Maj AMS 3C for Military Secretary.

**PREAMBLE :**

In the letter read at (1) above, it has been stated that the deputation period of Sqn. Ldr.Vivek Sarpal (27532) ACCTS as ADC to Governor has expired on 31st December 2013 and therefore his Excellancy the Governor had selected IC-71224 MAJ SAURABH YADAV, ENGRS as ADC to Governor and it has been requested to issue notification appointing IC-71224 MAJ SAURABH YADAV, ENGRS as the ADC to Governor of Karnataka and also the terms and conditions of the deputation.

In the letter read at (2) above, while forwarding the terms and conditions of deputation of the said officer as ADC to Governor, it has been stated that the approval of the chief of the Army Staff for appointment of IC- 71224 MAJ SAURABH YADAV, ENGRS Indian Army on deputation basis as ADC to Governor of Karnataka from 10th January 2014 to 9th January 2016 is conveyed.

In the Karnataka Governor's Secretariat Services (Recruitment) Rules, 1995 there are 2 posts of ADC's to Governor and the same one post could be filled by deputation of an officer of the armed forces of the union of the rank of Captain or Major or of an equivalent rank and another by Karnataka State Police Service.

The proposal has been examined, and the following order is issued :

### GOVERNMENT ORDER NO. DPAR 06 PRB 2014, BANGALORE, DATED: 14-03-2014

Government is pleased to appoint IC-71224 MAJ SAURABH YADAV, ENGRS as ADC to Governor of Karnataka for a period of 2 years retrospectively w.e.f. 10-01-2014 on the terms and conditions annexed herewith.

This order is issued with the concurrence of the Finance Department Vide No. FD 129 SE-1/14, dated 11-03-2014.

By Order and in the name of the Governor of Karnataka,
**S.K. VENKATESHA,**
Under Secretary to Government (I/C)
Department of Personnel and Administrative Reforms,
(Political)

**Annexure to Government Order No. DPAR 6 PRB 2014, Dated: 14.03.2014**

**TERMS AND CONDITIONS FOR DEPUTATION OF MAJOR SAURAB YADAV**

**AS ADC TO THE GOVERNOR OF KARNATAKA**

1. **TENURE:** The tenure of deputation will be for a period of two years. The duty of deputation will commence from the date the officer is relieved at the last duty station in the Indian Army and terminate on the date prior to rejoining the Indian Army. This period will be treated as Army service for all purposes. During the period of deputation the officer is liable to be recalled at any time, if exigencies of service so necessitate.

2. **DISCIPLINE:** The Army personnel will be under the administrative and functional control of competent authority of Govt. of Karnataka and will continue to be subject to the Army act and rules for disciplinary purpose. Army deputationists shall be reverted to the Army in case disciplinary proceedings are to be initiated and due cognizance will be given to Govt. of Karnataka reports.

3. **PAY:** The Army personnel shall be eligible for Basic pay, Military Service Pay and Grade Pay as admissible to them from time to time in the scale of pay of the rank held in the Army.

4. **ALLOWANCES:** DA, interim relief, if any sanctioned from time to time, kit maintenance allowance and all other allowances, at the rates sanctioned by the government from time to time subject to the same terms and conditions as applicable to service officers. The officer will be entitled to draw free ration in kind or cash allowance in lieu in accordance with the instructions as applicable to them from time to time. These allowances shall not be inferior to the relevant provisions of Army.

5. **ACCOMMODATION:** Fully furnished accommodation to Army deputationist would be provided by the State Govt., as per their entitlement. Wherever official accommodation is not available, accommodation of similar status would be hired in consultation with the deputationist. Officer will also be entitled to concession concerning water and electricity charges under the Army rules. Officers will be required to surrender Defense pool accommodation, if any in his possession. In case an officer continues to retain the Defence accommodation, he will be treated as unauthorized occupant and recovery of rent will be regulated under Para (14)(b) of Q & R i.e. assessed rent or market rent whichever is more, will be recovered.

*6. **LEAVE, LTC ETC:** During their deputation, they will continue to enjoy privileged leave, casual leave and leave travel concession as admissible to them under the respective service rules. Where Railway warrants or concession vouchers are normally issued under the service rules, the deputationist shall be allowed cash value in lieu, the whole expenditure in this regard shall be met by the State Govt.*

*7. **TRAVELLING ALLOWANCE:** Joining time and joining time pay, traveling allowance, for journey undertaken in joining the appointment on deputation and on reversion there from shall be regulated under the relevant rules of Govt. of Karnataka, which shall not be inferior to the relevant provision of the Army. A member of the Army will be paid TA/DA by the State Govt. under its own rules for the journey undertaken in connection with the official work, which shall not be inferior to the relevant provisions of the Army.*

*8. **MEDICAL BENEFITS:** Borrowing Agency will reimburse medical expenses incurred by the officer for self and his entitled family members, as per Rules of the Borrowing Agency during the period of deputation, on actual basis. Officer will be entitled for free medical aid, in case a military hospital exists in the station.*

*9. **UNIFORM GRANT:** The personnel joining the State Govt. will be authorized to draw uniform renewal grant as and when due. The expenditure incurred on this account will be borne by the State Govt.*

*10. **CHILDREN EDUCATION ALLOWANCE, CITY COMPENSATORY ALLOWANCE ETC:** The personnel joining the State Govt. on deputation will be granted other allowances, such as children education allowance, city compensatory allowance etc, as may be admissible to Govt. servants of corresponding ranks under the general orders of the Govt.*

*11. **SUBSCRIPTION TO ARMY GROUP INSURANCE FUND (AGIF), DEFENCE SERVICE OFFICERS PROVIDENT FUND SCHEME (DSOPF) AND ARMY OFFICERS BENEVOLENT FUND (AOBF):** The subscription will continue to be recovered from the officer by Govt. of Karnataka and the amount will be sent to AGI, (through CDA (0) and to CDA (0) for DSOPF and AOBF through monthly cheques respectively.*

*12. **GENERAL RULES:** In all matters relating to conditions of Service not specifically covered by the above items, the officer shall be governed by the Rules and Regulations applicable to the officers of the same rank in Indian Army from time to time, if any on mutual consent basis.*

**S.K. VENKATESHA,**
Under Secretary to Government (I/C)
Department of Personnel and Administrative Reforms,
(Political)

**P.R. 435**

## ನಗರಾಭಿವೃದ್ಧಿ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ನಅಇ 426 ಬೆಂಆಸೇ 2011, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2014**

ಸರ್ಕಾರದ ಆದೇಶ ಸಂಖ್ಯೆ : ನಅಇ 426 ಬೆಂಆಸೇ 2011, ದಿನಾಂಕ 03–04–2014ರ ಆದೇಶದಲ್ಲಿ "ಓದಲಾಗಿದೆ" ಭಾಗದ ಕ್ರಮ ಸಂ. 8ರಲ್ಲಿ "ದಿನಾಂಕ 19–04–2013" ರ ನಂತರ "ರಿಟ್ ಅರ್ಜಿ ಸಂ. 31486/2011 (ಎಲ್ಎ–ಬಿಡಿಎ)ರ ದಿನಾಂಕ 03–11–2011ರ ತೀರ್ಪು ಮತ್ತು ನ್ಯಾಯಾಲಯ ನಿಂದನಾ ಅರ್ಜಿ ಸಂ. 146/2014ರ ದಿನಾಂಕ 17–02–2014ರ ತೀರ್ಪು ಹಾಗೂ ರಿಟ್ ಅರ್ಜಿ ಸಂಖ್ಯೆ : 12377/2011ರ ದಿನಾಂಕ 21–07–2011ರ ತೀರ್ಪು ಹಾಗೂ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ : 842–843/2013ರ ದಿನಾಂಕ 19–11–2013ರ ತೀರ್ಪು" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಸದರಿ ಆದೇಶದ "ಪ್ರಸ್ತಾವನೆಯ" 8ರ ಕಂಡಿಕೆಯ "ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಿದೆ" ಪದಗಳ ನಂತರ "ರಿಟ್ ಅರ್ಜಿ ಸಂ.31486/2011 (ಎಲ್‌ಎ–ಬಿಡಿಎ) ದಿನಾಂಕ 03–11–2011ರ ಆದೇಶದಲ್ಲಿ ಸರ್ಕಾರವು ಪ್ರಸ್ತಾಪಿತ ಪ್ರಾಧಿಕಾರದ ಠರಾವನ್ನು ಸ್ವೀಕೃತಗೊಂಡ ಒಂದು ತಿಂಗಳೊಳಗಾಗಿ ಸೂಕ್ತ ಆದೇಶವನ್ನು ಹೊರಡಿಸುವಂತೆ ಮತ್ತು ರಿಟ್ ಅರ್ಜಿ ಸಂ. 12377/2011 ದಿನಾಂಕ 21–07–2011ರ ತೀರ್ಪಿನಲ್ಲಿ ಪ್ರಾಧಿಕಾರದ ಪ್ರಸ್ತಾವನೆ ಸ್ವೀಕೃತಗೊಂಡ 6 ವಾರದೊಳಗಾಗಿ ಸೂಕ್ತ ನಿರ್ಧಾರ ತೆಗೆದುಕೊಳ್ಳಬೇಕೆಂದು ಆದೇಶಿಸಿದೆ" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಹನುಮಂತಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಬಿಡಿಎ ಮತ್ತು ಬೆಂಗಳೂರು)

**PR. 448**
**SC. 350**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯಾದರ್ಶಿ, ಇವರ ವಿರುದ್ಧದ ಇಲಾಖಾ ವಿಚಾರಣೆಯ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧೀನ ಕಾರ್ಯದರ್ಶಿ, ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ ಎಮ್‌ಡಬ್ಲ್ಯೂಡಿ 22ಎಲ್‌ಎಂಆರ್2010 ದಿನಾಂಕ: 20–09–2011.
2. ನೋಟೀಸ್ ಸಂಖ್ಯೆ:ಸಿಆಸುಇ 04 ಸೇಇವಿ 2011, ದಿನಾಂಕ:29–9–2011.
3. ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರ ಮನವಿ ದಿನಾಂಕ: 15–10–2011 ಮತ್ತು 17–10–2011.
4. ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 04 ಸೇಇವಿ 2011, ದಿನಾಂಕ:03–11–2011, 30–1–2012.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 04 ಸೇಇವಿ 2011, ದಿನಾಂಕ: 28–02–2012.
6. ವಿಚಾರಣಾಧಿಕಾರಿಯವರ ಪತ್ರ ದಿನಾಂಕ: 03–06–2013.
7. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 04 ಸೇಇವಿ 2011 ದಿನಾಂಕ:10–07–2013, 27–08–2013, 16–12–13, 24–01–2014.
8. ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ: 30–10–2013.
9. ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರ ಮನವಿ ದಿನಾಂಕ:11–11–2013.
10. ಸರ್ಕಾರದ ಉಪ ಕಾರ್ಯದರ್ಶಿ ಸಿಆಸುಇ ಸೇವೆಗಳು ಇವರ ಅರೆ ಸರ್ಕಾರಿ ಪತ್ರ ದಿನಾಂಕ: 18–02–2014.
11. ಸರ್ಕಾರದ ಉಪ ಕಾರ್ಯದರ್ಶಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ದಿನಾಂಕ:11–03–2014.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ, ಸರ್ಕಾರದ ಅಧೀನ ಕಾರ್ಯದರ್ಶಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರ ಅನಧಿಕೃತ ಟಿಪ್ಪಣಿಯಲ್ಲಿ, ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರು ಈ ಹಿಂದೆ ಅಧೀನ ಕಾಯಾದರ್ಶಿಯಾಗಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಇಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದರೆನ್ನಲಾಗಿದ್ದ 07 ಆರೋಪಗಳ ಬಗ್ಗೆ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ, ಇವರು ತಯಾರಿಸಿ ಕಳುಹಿಸಿದ್ದ ಕರಡು ಆರೋಪ ಪಟ್ಟಿಯನ್ನು ಕಳುಹಿಸಿ, ಅದರ ಬಗ್ಗೆ ಸೂಕ್ತ ಕ್ರಮ ಜರುಗಿಸುವಂತೆ ಕೋರಿದ್ದ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ನೋಟೀಸಿನೊಂದಿಗೆ, ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿ ಶಿಸ್ತು ಕ್ರಮ ಕೈಗೊಳ್ಳುವ ಉದ್ದೇಶದಿಂದ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು.

ಮೇಲೆ (3)ರಲ್ಲಿ, ಓದಲಾದ ತಮ್ಮ ಮನವಿಯಲ್ಲಿ, ಸದರಿ ಅಧಿಕಾರಿಯವರು ತಮ್ಮ ವಿರುದ್ಧ ಜಾರಿಗೊಳಿಸಿರುವ ಆರೋಪಗಳಿಗೆ ಸಂಬಂಧಿಸಿದಂತೆ ಉತ್ತರಿಸಲು ಕಾಲಾವಕಾಶವನ್ನು ಮತ್ತು ಅನುಬಂಧ–3 ರಲ್ಲಿ ಸೂಚಿಸಿರುವ ದಾಖಲೆಗಳ ಪ್ರತಿಗಳನ್ನು ಒದಗಿಸುವಂತೆ ಕೋರಿದ್ದರು.

ಅದರಂತೆ ಮೇಲೆ (4)ರಲ್ಲಿ, ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ವಿಚಾರಣೆಗೆ ಸಂಬಂಧಿಸಿದ ದಾಖಲಾತಿಗಳನ್ನು ತಾವು ಖುದ್ದಾಗಿ ಅವಲೋಕಿಸಿದ ನಂತರ ನಿರ್ದಿಷ್ಟವಾಗಿ ತಮಗೆ ಬೇಕಾಗಿರುವ ದಾಖಲೆಗಳ ಪ್ರತಿಗಳ ಬಗ್ಗೆ ಕೋರಿಕೆ ಸಲ್ಲಿಸಿ ಸದರಿ ದಾಖಲಾತಿಗಳ ಪ್ರತಿಗಳನ್ನು ಪಡೆಯುವಂತೆ ತಿಳಿಸಲಾಗಿದ್ದರೂ ಸಹ ಈ ಬಗ್ಗೆ ಆರೋಪಿತ ಅಧಿಕಾರಿಯು ಯಾವುದೇ ಪ್ರತಿಕ್ರಿಯೆ ನೀಡದೇ ಇದ್ದುದರಿಂದ ಹಾಗೂ ಆರೋಪಿತ ಅಧಿಕಾರಿಗೆ ಜಾರಿಗೊಳಿಸಿದ ದೋಷಾರೋಪಣಾ ಪಟ್ಟಿಗೆ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಸಾಕಷ್ಟು ಕಾಲಾವಕಾಶ ನೀಡಿದಾಗ್ಯೂ ಆರೋಪಿತ ಅಧಿಕಾರಿಯು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸದೇ ಇದ್ದುದರಿಂದ ಈ ಪ್ರಕರಣದಲ್ಲಿ ನಿಯಮಾನುಸಾರ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿದ ಸರ್ಕಾರವು ಮೇಲೆ 05 ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವಿಚಾರಣಾಧಿಕಾರಿಯವರನ್ನು ನೇಮಿಸಿ ಆದೇಶಿಸಿತ್ತು.

ಅದರಂತೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ 06ರಲ್ಲಿ ಓದಲಾದ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಲಗತ್ತಿಸಿ ಕಳುಹಿಸಿದ್ದು, ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧದ 07 ಆರೋಪಗಳಲ್ಲಿ 1 ರಿಂದ 4 ಹಾಗೂ 6 ಮತ್ತು 7ನೇ ಆರೋಪಗಳು ವಿಚಾರಣೆಯಲ್ಲಿ ರುಜುವಾತಾಗಿರುವುದಿಲ್ಲವೆಂದೂ 5 ನೇ ಆರೋಪವು

ಭಾಗಶಃ ಸಾಬೀತಾಗಿದ್ದು ಇದರಲ್ಲಿ ಅಪಾಧಿತ ಅಧಿಕಾರಿಯು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರೊಂದಿಗೆ ದೂರವಾಣಿಯಲ್ಲಿ ಮಾತಾಡಲು ನಿರಾಕರಿಸಿರುವುದು ಸಾಭೀತಾಗಿರುತ್ತದೆ ಎಂದು ನಿರ್ಣಯಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ 07 ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಮತ್ತು ಮೇಲೆ 10ರಲ್ಲಿ ಓದಲಾದ ಸರ್ಕಾರದ ಉಪ ಕಾರ್ಯದರ್ಶಿ ಸೇವೆಗಳು ಇವರ ಅರೆ ಸರ್ಕಾರಿ ಪತ್ರದಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಕಳುಹಿಸಿ ವಿಚಾರಣಾ ವರದಿಯ ಬಗ್ಗೆ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಸ್ಪಷ್ಟ ಅಭಿಪ್ರಾಯವನ್ನು ನೀಡವಂತೆ ಕೋರಲಾಗಿತ್ತು,

ಮೇಲೆ 08 ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಆರೋಪಿತ ಅಧಿಕಾರಿಯವರಿಗೆ ಜಾರಿ ಮಾಡಿ ಈ ಬಗ್ಗೆ ತಮ್ಮ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು

ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಮೇಲೆ 09 ರಲ್ಲಿ, ಓದಲಾದ ಮನವಿಯಲ್ಲಿ ವಿಚಾರಣಾ ವರದಿ ಬಗ್ಗೆ ತಮ್ಮ ಹೇಳಿಕೆಯನ್ನು ಸಲ್ಲಿಸಿದ್ದು, ತಮ್ಮ ವಿರುದ್ಧ ಹೊರಿಸಲಾಗಿದ್ದ 07 ಆರೋಪಗಳಲ್ಲಿ 1 ರಿಂದ 4 ಹಾಗೂ 6 ಮತ್ತು 7 ನೇ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗದೆ ಇರುವುದರಿಂದ ಮತ್ತು 5ನೇ ಆರೋಪವು ಭಾಗಶಃ ಸಾಬೀತಾಗಿರುವುದನ್ನು ಪೂರ್ತಿಯಾಗಿ ಸಾಭೀತಾಗಿರುವುದಿಲ್ಲ ಎಂದೇ ಪರಿಗಣಿಸ ಬೇಕಾಗುತ್ತದೆಂದ್ದುದರಿಂದ ತಮ್ಮ ವಿರುದ್ಧದ ಆರೋಪವು ಸಾಬೀತಾಗಿಲ್ಲ ಎಂದು ಪರಿಗಣಿಸಬೇಕೆಂದು ಕೋರುವುದರೊಂದಿಗೆ ಸದರಿ ಆರೋಪದಲ್ಲಿ ತಿಳಿಸಿರುವಂತೆ ತಾವು ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರೊಂದಿಗೆ ಮಾತನಾಡಲು ನಿರಾಕರಿಸಿರುವುದಿಲ್ಲವೆಂದೂ ದಿನಾಂಕ:15-06-2010 ರಂದು ಎರಡನೇ ಸಾಕ್ಷಿದಾರರಾದ ಶ್ರೀಮತಿ ನುಸರತ್ ಮುವಾಹಿದಾ ಬೇಗಂ ಇವರು ತಮ್ಮ ಸ್ವಂತ ಮೊಬೈಲನ್ನು ತಮಗೆ ನೀಡಿ ಅದರಲ್ಲಿ ಕಾರ್ಯದರ್ಶಿಯವರೊಡನೆ ಮಾತನಾಡಲು ತಿಳಿಸಿದ್ದು, ಆ ಸಂದರ್ಭದಲ್ಲಿ ಆಯೋಗದ ಮಾನ್ಯ ಅಧ್ಯಕ್ಷರು ತಮ್ಮ ಕೊಠಡಿಗೆ ಬರುವಂತೆ ಕರೆದಿದ್ದರಿಂದ ಅಲ್ಲಿ ಚರ್ಚೆಯ ಮುಕ್ತಾಯದ ನಂತರ ಕಾರ್ಯದರ್ಶಿಯವರೊಡನೆ ಮಾತನಾಡಲು ಕಛೇರಿ ದೂರವಾಣಿ ಮುಖಾಂತರ ಪ್ರಯತ್ನಿಸಲಾಗಿದ್ದು ಕಾರ್ಯದರ್ಶಿಯವರ ಆಪ್ತ ಸಹಾಯಕರು ಕಾರ್ಯದರ್ಶಿಯವರು ಕಛೇರಿಯಲ್ಲಿ ಲಭ್ಯವಿಲ್ಲವೆಂದು ತಿಳಿಸಿದ್ದು ನಂತರ ಮತ್ತೊಮ್ಮೆ ಪ್ರಯತ್ನಿಸಲಾಗಿ ಕಾರ್ಯದರ್ಶಿಯವರು ತಮ್ಮೊಂದಿಗೆ ಮಾತನಾಡಲು ನಿರಾಕರಿಸಿರುತ್ತಾರೆ ಎಂದು ಕಾರ್ಯದರ್ಶಿಯವರ ಆಪ್ತ ಸಹಾಯಕರು ತಿಳಿಸಿರುತ್ತಾರೆ ಎಂದು ತಿಳಿಸುತ್ತಾ, ತಾವು ಈಗಾಗಲೇ ದಿನಾಂಕ: 30-09-2011 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ ತಮ್ಮ ವಿರುದ್ಧದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸುವಂತೆ ಕೋರಿರುತ್ತಾರೆ.

ಮೇಲೆ 11ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಉಪ ಕಾರ್ಯದರ್ಶಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ವಿಚಾರಣಾ ವರದಿಯ ಬಗ್ಗೆ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯು ಅಭಿಪ್ರಾಯವನ್ನು ತಿಳಿಸಿದ್ದು- ಆರೋಪಿತ ಅಧಿಕಾರಿಯವರ ವಿರುದ್ಧ ಹೊರಿಸಲಾಗಿದ್ದ 7 ಆರೋಪಗಳಲ್ಲಿ 1 ರಿಂದ 4 ಹಾಗೂ 6 ಮತ್ತು 7 ನೇ ಆರೋಪಗಳು ವಿಚಾರಣೆಯಲ್ಲಿ ಸಾಭೀತಾಗದೇ ಇರುವುದರಿಂದ ಹಾಗೂ 5 ನೇ ಆರೋಪವು ಮಾತ್ರ ಭಾಗಶಃ ಸಾಬೀತಾಗಿರುವುದರಿಂದ ಅಂದರೆ ಅಪಾದಿತ ಅಧಿಕಾರಿಯು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರೊಡನೆ ದೂರವಾಣಿಯಲ್ಲಿ ಮಾತನಾಡಲು ನಿರಾಕರಿಸಿರುವುದು ಮಾತ್ರ ಸಾಬೀತಾಗಿದ್ದರೂ ಸಹ ಸದರಿ ಅಧಿಕಾರಿಯು ಈಗಾಗಲೇ ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಆರೋಪಿತರಿಗೆ ಎಚ್ಚರಿಗೆ ನೀಡಿ ಆರೋಪಮುಕ್ತಗೊಳಿಸಬಹುದು ಎಂದು ತಿಳಿಸಿರುತ್ತದೆ.

ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಆರೋಪಿತ ಅಧಿಕಾರಿಯ ವಿರುದ್ಧ ಹೊರಿಸಲಾಗಿದ್ದ 07 ಆರೋಪಗಳಲ್ಲಿ 1 ರಿಂದ 4, ಹಾಗೂ 6 ಮತ್ತು 7 ನೇ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗದೇ ಇರುವುದರಿಂದ ಮತ್ತು 5ನೇ ಆರೋಪವು ಭಾಗಶಃ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ನಿರ್ಣಯಿಸಿದ್ದು ಇದರಲ್ಲಿ ಆರೋಪಿತ ಅಧಿಕಾರಿಯು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರೊಡನೆ ದೂರವಾಣಿಯಲ್ಲಿ ಮಾತನಾಡಲು ನಿರಾಕರಿಸಿರುವುದು ಮಾತ್ರ ಸಾಬೀತಾಗಿರುವುದಾಗಿ ನಿರ್ಣಯಿಸಿದ್ದರೂ ಸಹ ಆರೋಪಿತರು ಈಗಾಗಲೇ ಸರ್ಕಾರಿ ಸೇವೆಯಿಂದ ವಸೋನಿವೃತ್ತಿ ಹೊಂದಿರುವುದರಿಂದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯು ತಿಳಿಸಿರುವಂತೆ ಆರೋಪಿತ ಅಧಿಕಾರಿಗೆ ಎಚ್ಚರಿಗೆ ನೀಡಲು ಅವಕಾಶವಿಲ್ಲದೇ ಇರುವುದರಿಂದ ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಹಾಗೂ ಸದರಿ ವಿಚಾರಣಾ ವರದಿಯ ಬಗ್ಗೆ ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರ ಹೇಳಿಕೆ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯು ನೀಡಿರುವ ಅಭಿಪ್ರಾಯ ಇವುಗಳನ್ನು ಆಧರಿಸಿ ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧ ಹೊರಿಸಲಾಗಿದ್ದ ಆರೋಪಗಳಿಂದ ಇವರನ್ನು ದೋಷಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಸೇಇವಿ 2011, ಬೆಂಗಳೂರು, ದಿನಾಂಕ:28-04-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಸೈಯದ್ ಅಬ್ದುಲ್ ನಜೀರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಇವರು ಈ ಹಿಂದೆ ಅಧೀನ ಕಾರ್ಯದರ್ಶಿಯಾಗಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಇಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದರೆನ್ನಲಾಗಿದ್ದ ಆರೋಪಗಳಿಂದ ಇವರನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಅವರು ಪಡೆಯಬಹುದಾಗಿದ್ದ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಶ್ರೀಯುತರು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 433

**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-6)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಯೋಇ 44 ಯೋವಿವಿ 2013 ದಿನಾಂಕ:27-05-2013.
2. ಸರ್ಕಾರಿ ಆದೇಶ ಸಂಖ್ಯೆ:ಯೋಇ 44 ಯೋವಿವಿ 2013 ದಿನಾಂಕ:16-01-2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶಗಳಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಪಡಿಸುವ ಸಲುವಾಗಿ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡಿ ಆದೇಶಿಸಲಾಗಿತ್ತು ಹಾಗೂ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ.ಜೆ.ಜಾರ್ಜ್, ಮಾನ್ಯ ಗೃಹ ಸಚಿವರು ಇವರನ್ನು ಕೊಡಗು ಜಿಲ್ಲೆಯ ಉಸ್ತುವಾರಿ ಸಚಿವರಾಗಿ ನೇಮಕ ಮಾಡಿ ಆದೇಶಿಸಲಾಗಿತ್ತು.

ಪ್ರಸ್ತುತ ಶ್ರೀ ಕೆ.ಜೆ.ಜಾರ್ಜ್, ಮಾನ್ಯ ಗೃಹ ಸಚಿವರು, ಇವರು ವಿದೇಶ ಪ್ರವಾಸದಲ್ಲಿರುವುದರಿಂದ ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ಕುಡಿಯುವ ನೀರಿನ ಸಮಸ್ಯೆ ನಿವಾರಣೆ ಹಾಗೂ ಮತ್ತಿತರ ತುರ್ತು ಕಾಮಗಾರಿಗಳ ಬಗ್ಗೆ ಪರಿಶೀಲಿಸುವ ಸಲುವಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013 ಬೆಂಗಳೂರು, ದಿನಾಂಕ:14-05-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಕೆ.ಜೆ.ಜಾರ್ಜ್, ಮಾನ್ಯ ಗೃಹ ಸಚಿವರು, ಇವರು ವಿದೇಶ ಪ್ರವಾಸದಿಂದ ಹಿಂದಿರುಗುವವರೆಗೆ ಶ್ರೀ ಹೆಚ್.ಎಸ್.ಮಹದೇವ ಪ್ರಸಾದ್, ಸಹಕಾರ ಸಚಿವರು ಹಾಗೂ ಚಾಮರಾಜನಗರ ಜಿಲ್ಲಾ ಉಸ್ತುವಾರಿ ಸಚಿವರು, ಇವರನ್ನು ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ಕುಡಿಯುವ ನೀರಿನ ಸಮಸ್ಯೆ ನಿವಾರಣೆ ಹಾಗೂ ಮತ್ತಿತರ ತುರ್ತು ಕಾಮಗಾರಿಗಳ ಬಗ್ಗೆ ಉಸ್ತುವಾರಿ ವಹಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ(1&2)(ಪ್ರ),

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**P.R. 450**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸರ್ಕಾರದ ಜಂಟಿ ಕಾರ್ಯದರ್ಶಿಗಳು/ಸರ್ಕಾರದ ಉಪ ಕಾರ್ಯದರ್ಶಿಗಳಿಗೆ ಗೃಹ ಪರಿಚಾರಕ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂ: ಎಫ್‌ಡಿ 17 ಎಸ್‌ಆರ್‌ಪಿ (1) 61 ದಿನಾಂಕ:27.02.1961.
2. ಸರ್ಕಾರಿ ಆದೇಶ ಸಂ: ಡಿಪಿಎಆರ್ 73 ಸಿಡಿಎ 78 ದಿನಾಂಕ:15.05.1980.
3. ಸರ್ಕಾರಿ ಆದೇಶ ಸಂ: ಡಿಪಿಎಆರ್ 40 ಸಿಡಿಎ 85 (ಪಿ) ದಿನಾಂಕ:02.05.1987.
4. ಸರ್ಕಾರಿ ಆದೇಶ ಸಂ: ಡಿಪಿಎಆರ್ 34 ಸಿಸೇನಿ 96 ದಿನಾಂಕ:24.04.1997.
5. ಸರ್ಕಾರಿ ಆದೇಶ ಸಂ: ಡಿಪಿಎಆರ್ 34 ಸಿಸೇನಿ 96 ದಿನಾಂಕ:16.09.1997.
6. ತಿದ್ದುಪಡಿ ಆದೇಶ ಸಂ: ಸಿಆಸುಇ 34 ಸಿಸೇನಿ 96 ದಿನಾಂಕ:01.06.1998.
7. ಸರ್ಕಾರಿ ಆದೇಶ ಸಂ: ಸಿಆಸುಇ 196 ಸಿಸೇನಿ 2001, ದಿನಾಂಕ:06.05.2006.
8. ಸರ್ಕಾರದ ಆದೇಶ ಸಂ: ಸಿಆಸುಇ 232 ಸಿಸೇನಿ 2011, ದಿನಾಂಕ:22.10.2011.
9. ಸರ್ಕಾರದ ಆದೇಶ ಸಂ: ಸಿಆಸುಇ 232 ಸಿಸೇನಿ 2011, ದಿನಾಂಕ: 28.01.2012.
10. ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ 69273 ಉಕಾಸೇ 2013, ದಿನಾಂಕ:28.11.2013.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶಗಳಲ್ಲಿ ಸರ್ಕಾರದ ವಿವಿಧ ವರ್ಗದ ಅಧಿಕಾರಿಗಳಿಗೆ ಗೃಹ ಪರಿಚಾರಕ ಭತ್ಯೆಯನ್ನು ಮಂಜೂರು ಮಾಡಲಾಗಿದೆ ಮತ್ತು ಪರಿಷ್ಕರಿಸಲಾಗಿದೆ. ಮೇಲೆ ಓದಲಾದ (9)ರ ಆದೇಶದಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ/ಅಪರ ಕಾರ್ಯದರ್ಶಿಗಳಿಗೆ ಗೃಹ ಪರಿಚಾರಕ ಭತ್ಯೆಯನ್ನು ನೀಡಲಾಗಿದೆ. ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ಇವರು ಮೇಲೆ ಓದಲಾದ (10)ರ ಟಿಪ್ಪಣಿಯಲ್ಲಿ ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ) ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ಹುದ್ದೆಯು ಐ.ಎ.ಎಸ್ ವೃಂದದ ಹುದ್ದೆಗಳಾಗಿರುವುದರಿಂದ ತಮಗೂ ಗೃಹ ಪರಿಚಾರಕ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಅದರಂತೆ, ಅವರ ಕೋರಿಕೆಯನ್ನು ಪರಿಶೀಲಿಸಿ ಸದರಿ ಭತ್ಯೆಯನ್ನು ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ ವೃಂದದ ಅಧಿಕಾರಿಗಳಿಗೂ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 329 ಸಿಸೇನಿ 2013 ಬೆಂಗಳೂರು, ದಿನಾಂಕ:14.05.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕೆಳಕಂಡ ವೃಂದದ ಅಧಿಕಾರಿಗಳಿಗೆ ಈ ಕೆಳಗಿನಂತೆ ಗೃಹ ಪರಿಚಾರಕ ಭತ್ಯೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮಂಜೂರಾತಿ ಮಾಡಲಾಗಿದೆ;

| ಕ್ರ.ಸಂ | ಅಧಿಕಾರಿ ವರ್ಗ | ಗೃಹ ಪರಿಚಾರಕ ಭತ್ಯೆ |
|---|---|---|
| 1. | ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರದ ಉಪ ಕಾರ್ಯದರ್ಶಿಗಳು/ಜಂಟಿ ಕಾರ್ಯದರ್ಶಿಗಳು, [ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು)/ ಉಪ ಕಾರ್ಯದರ್ಶಿ, (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ ಇವರನ್ನು ಹೊರತು ಪಡಿಸಿ. | ಮಾಸಿಕ ರೂ.2000/- (ರೂಪಾಯಿಗಳು ಎರಡು ಸಾವಿರ ಮಾತ್ರ) |
| 2. | ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ಮತ್ತು ಸರ್ಕಾರದ ಉಪ ಕಾರ್ಯದರ್ಶಿ, (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ. | ಮಾಸಿಕ ರೂ.3000/ (ರೂಪಾಯಿಗಳು ಮೂರು ಸಾವಿರ ಮಾತ್ರ) |

ಅಧಿಕಾರಿಗಳ ನಿವಾಸಕ್ಕೆ ಕಚೇರಿಯಿಂದ ಗೃಹ ಪರಿಚಾರಕರನ್ನು ಒದಗಿಸದಿದ್ದಲ್ಲಿ ಮಾತ್ರ ಈ ಭತ್ಯೆಯನ್ನು ನೀಡಲಾಗುವುದು. ಈ ಭತ್ಯೆಯನ್ನು ಮಂಜೂರು ಮಾಡಲು ಈ ಹಿಂದೆ ವಿಧಿಸಿರುವ ಇತರೆ ನಿರ್ಬಂಧಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 20 ಎಸ್‌ಆರ್‌ಪಿ 2012, ದಿನಾಂಕ: 07.05.2014ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೈ.ಎಸ್. ದಳವಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ-3)

P.R. 432
SC - 100

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮೈಸೂರು ಅರಮನೆ ಮಂಡಳಿಯಲ್ಲಿ ಒಂದು ನಿರ್ದೇಶಕರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಮೈಸೂರು ಅರಮನೆ (ಅರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1998.

**ಪ್ರಸ್ತಾವನೆ:**

ಮೈಸೂರು ಅರಮನೆ ಮತ್ತು ಅದರ ಸುತ್ತಮುತ್ತಲಿನ ಖಾಲಿ ಜಾಗವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಆರ್ಜಿಸುವುದಕ್ಕೆ, ವರ್ಗಾವಣೆ ಮಾಡುವುದಕ್ಕೆ ಮತ್ತು ಅದರ ಸಂರಕ್ಷಣೆಗೆ ಹಾಗೂ ಅದಕ್ಕೆ ಸಂಬಂಧಪಟ್ಟ ವಿಷಯಗಳಿಗೆ ಉಪಬಂಧ ಕಲ್ಪಿಸಲು ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1998 ನ್ನು ದಿ: 30.11.1998 ರಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ ಜಾರಿಗೆ ತರಲಾಗಿದೆ. ಈ ಅಧಿನಿಯಮದ ಅಧ್ಯಾಯ-5, ಕಲಂ-24ರ ಅನ್ವಯ ಅರಮನೆಯ ಆಡಳಿತ ನಿರ್ವಹಣೆಗಾಗಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಟ್ರಸ್ಟಿಗಳ ಮಂಡಳಿಯು ಇರುತ್ತದೆ. ಕಲಂ: 26ರ ಅನ್ವಯ ರಾಜ್ಯ ಸರ್ಕಾರವು ಮಂಡಳಿಗೆ ಒಬ್ಬ ಕಾರ್ಯನಿರ್ವಾಹಕ ಅಧಿಕಾರಿಯನ್ನು ಮತ್ತು ಆತನಿಗೆ ನೆರವು ನೀಡಲು ತಾನು ಅವಶ್ಯವೆಂದು ಭಾವಿಸುವಂಥ ಸಂಖ್ಯೆಯ ಇತರ ಅಧಿಕಾರಿಗಳನ್ನು ನೇಮಕ ಮಾಡಲು ಅವಕಾಶವಿರುತ್ತದೆ. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಪದನಿಮಿತ್ತ ಮಂಡಳಿಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುತ್ತಾರೆ. ಇವರ ತಕ್ಷಣದ ಅಧೀನದಲ್ಲಿ ಸಹಾಯಕ ನಿರ್ದೇಶಕರ ಹುದ್ದೆ ಇದ್ದು, ಪ್ರಸ್ತುತ ಉಪ ನಿರ್ದೇಶಕರ ಹುದ್ದೆಗೆ (ವೇತನ ಶ್ರೇಣಿ: ರೂ. 36,300-53,850) ಉನ್ನತೀಕರಿಸಲಾಗಿದೆ.

ಪದನಿಮಿತ್ತ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ತಮ್ಮ ಮೂಲ ಕೆಲಸದ ಒತ್ತಡದಲ್ಲಿ ಅರಮನೆಯ ಆಡಳಿತ ನಿರ್ವಹಣೆಗಾಗಿ ಅವಶ್ಯಕ ಸಮಯ ನೀಡಲು ಸಾಧ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಅರಮನೆಯ ಆಡಳಿತ ನಿರ್ವಹಣೆಯಲ್ಲಿ ಹೆಚ್ಚಿನ ಪರಿಣಾಮವನ್ನು ತರಲು ಹಾಗೂ ಬಂಧವನ್ನು ಒದಗಿಸಲು ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯ ತಕ್ಷಣದ ಅಧೀನದಲ್ಲಿ ಹಾಗೂ ಉಪ ನಿರ್ದೇಶಕರ ಹುದ್ದೆಯ ತಕ್ಷಣದ ಮೇಲೆ ಕೆ.ಎ.ಎಸ್. ಗ್ರೂಪ್-ಎ ಸೀನಿಯರ್ ಸ್ಕೇಲ್ (ವೇತನ ಶ್ರೇಣಿ: ರೂ. 40,050-56,500) ಅಥವಾ ಕೆ.ಎ.ಎಸ್. ಗ್ರೂಪ್-ಎ ಸೆಲೆಕ್ಷನ್ ಗ್ರೇಡ್ (ವೇತನ ಶ್ರೇಣಿ: ರೂ. 48,900-63,600) ಅಧಿಕಾರಿಯಿಂದ ಭರ್ತಿ ಮಾಡಬಹುದಾದ, ಒಂದು ನಿರ್ದೇಶಕ ಹುದ್ದೆಯನ್ನು ಸೃಜಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಸೂಕ್ತವಾಗಿದೆ.

ಆದ್ದರಿಂದ, ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 46 ಸೇಅವಿ 2014, ಬೆಂಗಳೂರು, ದಿನಾಂಕ:09-05-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮೈಸೂರು ಅರಮನೆ ಮಂಡಳಿಯ ಸುಗಮ ಆಡಳಿತದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ, ಮೈಸೂರು ಅರಮನೆ ಮಂಡಳಿಗೆ ಕೆ.ಎ.ಎಸ್. ಗ್ರೂಪ್-ಎ ಸೀನಿಯರ್ ಸ್ಕೇಲ್ (ವೇತನ ಶ್ರೇಣಿ: ರೂ. 40,050-56,500) ಅಧಿಕಾರಿಯಿಂದ ಭರ್ತಿ ಮಾಡಬಹುದಾದ, ಒಂದು ನಿರ್ದೇಶಕರ ಹುದ್ದೆಯನ್ನು ಸೃಜಿಸಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2205-ಕಲೆ ಮತ್ತು ಸಂಸ್ಕೃತಿ 107-ಸಂಗ್ರಹಾಲಯ-04 ಮೈಸೂರು ಅರಮನೆ ಉಸ್ತುವಾರಿ ವೇತನ (ಯೋಜನೇತರ)" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 271 ವೆಚ್ಚ-12/2014, ದಿನಾಂಕ: 25-04-2014ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-4)

P.R. 436
SC - 100

## ಇಂಧನ ಸಚಿವಾಲಯ

**ವಿಷಯ:** Regulating the Legal Charges including professional fees payable to the Advocate on behalf of all ESCOMs.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಇಎನ್ 141 ಸಮನ್ವಯ 2013, ದಿನಾಂಕ: 24.06.2013.
2) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KPTCL/B-37/33214/2012-13/84, ದಿನಾಂಕ: 19.04.2014.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎಲ್ಲಾ ಎಸ್ಕಾಂಗಳ ಪರವಾಗಿ ನ್ಯಾಯಾಲಯಗಳಲ್ಲಿ ವಾದ ಮಂಡಿಸುವ ನ್ಯಾಯವಾದಿಗಳ ಬಿಲ್ಲನ್ನು ಪಾವತಿಸುವ ಕುರಿತು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಅನುಸರಿಸಬೇಕಾದ ಕ್ರಮಗಳ ಬಗ್ಗೆ ಸೂಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ದಿನಾಂಕ: 19–04–2014 ರ ಪತ್ರದಲ್ಲಿ, ಪ್ರಸ್ತುತ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಸರ್ಕಾರದ, ದಿನಾಂಕ: 24–06–2013ರ ಆದೇಶದಲ್ಲಿನ ಸೂಚನೆಗಳ ಪ್ರಕಾರ ನ್ಯಾಯಾವಾದಿಗಳ ಬಿಲ್ಲುಗಳನ್ನು ಪಾವತಿಸಲು ಕ್ರಮ ಕೈಗೊಂಡು ನ್ಯಾಯಾವಾದಿಗಳ ಬಿಲ್ಲುಗಳನ್ನು ಪರಿಶೀಲಿಸಿ ಪ್ರಕರಣಗಳಲ್ಲಿನ ಬಾಧ್ಯತೆಯನುಸಾರ ನಿರ್ದೇಶಕರು (ನಿಯಂತ್ರಣ ವ್ಯವಹಾರಗಳು), ಕವಿಪ್ರನಿನಿ ಹಾಗೂ ನೋಡಲ್ ಅಧಿಕಾರಿ, ಎಸ್ಕಾಂಗಳು ರವರು ಸಂಬಂಧಿಸಿದ ಎಸ್ಕಾಂಗಳಿಗೆ ಬಿಲ್ಲುಗಳ ಮೊತ್ತವನ್ನು ಹಂಚಿಕೆ ಮಾಡಿ ಆದೇಶ ಹೊರಡಿಸುತ್ತಿದ್ದಾರೆ. ಆದರೆ ಈ ಕ್ರಮದ ಸಂಬಂಧ ಕೆಲವು ನ್ಯಾಯವಾದಿಗಳು ತಮ್ಮ ಬಿಲ್ಲುಗಳನ್ನು ಒಂದೇ ಸಲ ಪೂರ್ಣವಾಗಿ ಪಾವತಿಸದೇ ಎಸ್ಕಾಂಗಳಿಗೆ ಹಂಚಿಕೆ ಮಾಡುತ್ತಿರುವುದರಿಂದ ಸದರಿ ಮೊತ್ತದ ಪಾವತಿಯ ಬಗ್ಗೆ ಎಲ್ಲಾ ಎಸ್ಕಾಂಗಳೊಡನೆ ಪದೇ ಪದೇ ವಿಚಾರಿಸಲು ತೊಂದರೆಯಾಗುತ್ತಿರುವುದಾಗಿ ತಿಳಿಸಿರುತ್ತಾರೆಂದೂ, ಆದ್ದರಿಂದ ಬಾಧ್ಯತೆಯನುಸಾರ ಸಂಬಂಧಿಸಿದ ಎಸ್ಕಾಂಗಳಿಗೆ ಹಂಚಿಕೆ ಮಾಡಿದ ನ್ಯಾಯವಾದಿಗಳ ಬಿಲ್ಲುಗಳ ಮೊತ್ತವನ್ನು ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್ (PCKL) ವತಿಯಿಂದ ಪೂರ್ಣವಾಗಿ ಪಾವತಿಸಿ, ನಂತರ ಪಾವತಿಸಿದ ಬಿಲ್ಲುಗಳ ಮೊತ್ತವನ್ನು ಸಂಬಂಧಿಸಿದ ಎಸ್ಕಾಂಗಳಿಗೆ ತಮ್ಮ Books of Accounts ನಲ್ಲಿ ಹೊಂದಾಣಿಕೆ ಮಾಡಿಕೊಳ್ಳುವಂತೆ ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್‌ಗೆ ನಿರ್ದೇಶನ ನೀಡುವಂತೆಯೂ, ಇದರಿಂದ ನ್ಯಾಯವಾದಿಗಳು ಕೋರಿರುವಂತೆ ಅವರ ಬಿಲ್ಲುಗಳು ಒಮ್ಮೆಲೇ ಪಾವತಿಯಾಗಲು ಹಾಗೂ ನಕಲಾಗುವುದನ್ನು (Duplication) ತಪ್ಪಿಸಲು ಸಹಾಯಕವಾಗುತ್ತದೆಂದು ತಿಳಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಉಲ್ಲೇಖದ ಕ್ರಮ ಸಂಖ್ಯೆ (1) ರಲ್ಲಿನ ಆದೇಶದಲ್ಲಿ ಸೂಚಿಸಿರುವ ಕ್ರಮವನ್ನು ಮಾರ್ಪಡಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 190 ಸಮನ್ವಯ 2014 ಬೆಂಗಳೂರು, ದಿನಾಂಕ: 12–05–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಎಲ್ಲಾ ಎಸ್ಕಾಂಗಳ ಪರವಾಗಿ ನ್ಯಾಯಾಲಯಗಳಲ್ಲಿ ವಾದ ಮಂಡಿಸುವ ನ್ಯಾಯವಾದಿಗಳ ಬಿಲ್ಲನ್ನು ಪಾವತಿಸುವ ಕುರಿತು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಇನ್ನು ಮುಂದೆ ಈ ಕೆಳಗೆ ಸೂಚಿಸಿರುವ ಕ್ರಮಗಳನ್ನು ಅನುಸರಿಸುವಂತೆ ಆದೇಶಿಸಲಾಗಿದೆ.

1. MD, KPTCL is authorised to decide and approve the Professional Charges payable to the Advocates engaged to appear on behalf of ESCOMs before the relevant forums.
2. Whenever any bill towards Legal Charges is received from the Advocate, it shall be forwarded to the Director (RA), KPTCL for necessary action.
3. The O/o the Director (RA), KPTCL & Nodal Officer, Regulatory Affairs (Legal), ESCOMs will process the bill considering the number of Petitioners/Respondents (KPTCL and/or ESCOMs) involved in the matter. Considering the extent of the relevance of the petition to the respective ESCOMs, the Legal Charges will be apportioned amongst the ESCOMs by Nodal Officer, Regulatory Affairs (Legal), ESCOMs.
4. Necessary communication on the extent of liability towards Legal Charges to be discharged by the respective ESCOM/s will be intimated to PCKL & ESCOMs by the Director (RA), KPTCL.
5. Power Company of Karnataka Limited shall discharge in full the liability of ESCOMs to the Advocate as recommended by the Director (RA), KPTCL & Nodal Officer, RA (Legal), ESCOMs towards Legal Charges with respect to the concerned bill of the Advocate duly following all necessary procedures.
6. Power Company of Karnataka Limited shall simultaneously take necessary action to account the liability discharged towards Legal Charges apportioned by Director (RA), KPTCL in the respective accounts of ESCOM/s in their Books of Accounts duly following all necessary procedures.
7. No ESCOM shall Suo Motu discharge the payment towards Legal Charges to their Advocate in respect of Regulatory Affairs Legal issues.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**P.R. 449**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59